# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1355

ಮಾನ್ಯ ಸದಸ್ಯರ ಹೆಸರು : ಶ್ರೀ. ಬಿ.ಎಂ.ಎಲ್. ಕಾಂತ್‌ರಾಜ್ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು)

ಉತ್ತರಿಸುವ ದಿನಾಂಕ : 24-12-2021

ಉತ್ತರಿಸುವ ಸಚಿವರು : ಕೃಷಿ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೃಷಿ ಇಲಾಖೆಯನ್ನು ಯಾವಾಗ ಸ್ಥಾಪನೆ ಮಾಡಲಾಯಿತು; ಇದರ ಧ್ಯೇಯೋದ್ದೇಶಗಳೇನು; ಇದರ ವ್ಯಾಪ್ತಿಯಲ್ಲಿ ಬರುವ ನಿಗಮ, ಮಂಡಳಿ, ಇತರೆ ಅಂಗ ಸಂಸ್ಥೆಗಳಾವುವು; (ವಿವರವಾದ ಮಾಹಿತಿ ನೀಡುವುದು) | ಕೃಷಿ ಇಲಾಖೆಯನ್ನು ಜುಲೈ 5, 1913ರಲ್ಲಿ ಸ್ಥಾಪನೆ ಮಾಡಲಾಯಿತು.<br>**ಧ್ಯೇಯೋದ್ದೇಶಗಳು:**<br>• ಕೃಷಿ ಉತ್ಪಾದನೆ ಹಾಗೂ ಉತ್ಪಾದಕತೆಗಳನ್ನು ಹೆಚ್ಚಿಸಿ, ಕೃಷಿ ಕ್ಷೇತ್ರದಲ್ಲಿ ನಿಗದಿಪಡಿಸಿದ ಗುರಿ ಶೇ. 4.5ರ ಬೆಳವಣಿಗೆಯನ್ನು ಸಾಧಿಸುವುದು.<br>• ಸಹಿಷ್ಣುತೆ ಮತ್ತು ನೈಸರ್ಗಿಕ ಸಂಪನ್ಮೂಲಗಳ ಸಂರಕ್ಷಣೆಯೊಂದಿಗೆ ಹವಾಮಾನ ವೈಪರೀತ್ಯಗಳಿಂದ ಕೂಡಲೇ ಚೇತರಿಸಿಕೊಳ್ಳುವ ಕೃಷಿಯನ್ನು ಉತ್ತೇಜಿಸುವುದು.<br>• ರೈತ ಸ್ನೇಹಿ ಸಂಶೋಧನೆ ಮತ್ತು ಅಭಿವೃದ್ಧಿ, ಶಿಕ್ಷಣ ಹಾಗೂ ಉತ್ಪಾದನಾ ವೆಚ್ಚ ಕಡಿಮೆಗೊಳಿಸಲು ಪರಿಣಾಮಕಾರಿ ತಾಂತ್ರಿಕತೆಗಳ ವರ್ಗಾವಣೆಯನ್ನು ಉತ್ತೇಜಿಸುವುದು.<br>• ರೈತ ಉತ್ಪಾದಕರ ಸಂಸ್ಥೆ, ರೈತ ಸಂಘಗಳ ಮೂಲಕ ರೈತರನ್ನು ಒಗ್ಗೂಡಿಸುವಿಕೆಯನ್ನು ಸಂಸ್ಥೀಕರಿಸಿ, ಸಾರ್ವಜನಿಕ-ಖಾಸಗಿ ಸಹಭಾಗಿತ್ವದಲ್ಲಿ ಸಮಗ್ರ ಕೃಷಿ ಅಭಿವೃದ್ಧಿಯನ್ನು (PPPIAD) ಪ್ರೋತ್ಸಾಹಿಸುವುದು<br>• ಸೂಕ್ತ ನೀತಿಯ ಮೂಲಕ ಗ್ರಾಮೀಣ ಯುವಕರನ್ನು ಕೃಷಿ ವ್ಯವಹಾರದಲ್ಲಿ ತೊಡಗಿಸಿಕೊಳ್ಳಲು ಪ್ರೋತ್ಸಾಹಿಸುವುದು.<br>• ಮೌಲ್ಯ ಸರಪಳಿ ಸಂಪರ್ಕದ ಮೂಲಕ ಕೃಷಿ ಯಾಂತ್ರೀಕತೆಯನ್ನು ಹೆಚ್ಚಿಸುವುದರ ಜೊತೆಗೆ ಕೊಯ್ಲೋತ್ತರ ತಾಂತ್ರಿಕತೆಗಳನ್ನು ಅಭಿವೃದ್ಧಿಪಡಿಸುವುದು. |

- ಯೋಜಿತ ಕೃಷಿ ಅಭಿವೃದ್ಧಿಗಾಗಿ ನೀತಿಗಳನ್ನು ರೂಪಿಸಿ, ಕಾರ್ಯಕ್ರಮಗಳು ಹಾಗೂ ತಾಂತ್ರಿಕತೆಗಳನ್ನು ಸಮ್ಮಿಳನಗೊಳಿಸುವುದು.
- ಕೃಷಿ ಸಂಬಂಧಿತ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಾಗೂ ವಿವಿಧ ಪರಿಕರಗಳ ಸಕಾಲ ವಿತರಣೆ ವ್ಯವಸ್ಥೆಯನ್ನು ಎಲ್ಲ ಹಂತಗಳಲ್ಲಿ ಬಲಪಡಿಸುವುದು.

ಕೃಷಿ ಇಲಾಖೆಯ ವ್ಯಾಪ್ತಿಯಲ್ಲಿ ಈ ಕೆಳಕಂಡ ನಿಗಮ, ಮಂಡಳಿ, ಇತರೆ ಅಂಗ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿವೆ:

- ಕರ್ನಾಟಕ ರಾಜ್ಯ ಬೀಜ ನಿಗಮ ನಿಯಮಿತ, ಬೆಂಗಳೂರು
- ಕರ್ನಾಟಕ ರಾಜ್ಯ ಬೀಜ ಮತ್ತು ಸಾವಯವ ಪ್ರಮಾಣ ಸಂಸ್ಥೆ, ಬೆಂಗಳೂರು
- ಕರ್ನಾಟಕ ರಾಜ್ಯ ಕೃಷಿ ಉತ್ಪನ್ನಗಳ ಸಂಸ್ಕರಣೆ ಮತ್ತು ರಫ್ತು ನಿಗಮ ನಿಯಮಿತ, ಬೆಂಗಳೂರು
- ಕರ್ನಾಟಕ ಅಂತರ ಗಂಗಾ ಸೂಕ್ಷ್ಮ ನೀರಾವರಿ ನಿಗಮ ನಿಯಮಿತ, ಬೆಂಗಳೂರು
- ಕರ್ನಾಟಕ ರಾಜ್ಯ (ದ್ವಿದಳ ಧಾನ್ಯ) ಅಭಿವೃದ್ಧಿ ಮಂಡಳಿ ನಿಯಮಿತ, ಕಲಬುರಗಿ
- ಫುಡ್ ಕರ್ನಾಟಕ ಲಿಮಿಟೆಡ್, ಬೆಂಗಳೂರು.

## ಜಲಾನಯನ ಅಭಿವೃದ್ಧಿ ಇಲಾಖೆ

ಸರ್ಕಾರದ ಆದೇಶ ಸಂಖ್ಯೆ: ಎ.ಹೆಚ್.ಡಿ 206 ಎ.ಎಂ.ಎಲ್ 94(vol-3) ಬೆಂಗಳೂರು, ದಿನಾಂಕ:31.12.1999 ರಂತೆ ರಾಜ್ಯದಲ್ಲಿ ಜಲಾನಯನ ಚಟುವಟಿಕೆಗಳ ಅನುಷ್ಠಾನಕ್ಕೆ ಜಲಾನಯನ ಅಭಿವೃದ್ಧಿ ಇಲಾಖೆಯನ್ನು ದಿನಾಂಕ: 01.01.2000 ರಿಂದ ಅನ್ವಯಿಸುವಂತೆ ಸ್ಥಾಪನೆ ಮಾಡಲಾಯಿತು.

ರಾಜ್ಯದಲ್ಲಿ ಮಳೆಯಾಶ್ರಿತ ಪ್ರದೇಶದ ಮಣ್ಣಿನ ಫಲವತ್ತತೆಯನ್ನು ಹೆಚ್ಚಿಸಲು ಮತ್ತು ಮಣ್ಣಿನಲ್ಲಿ ನೀರಿನ ಇಂಗುವಿಕೆಯನ್ನು ಹೆಚ್ಚು ಮಾಡಿ, ಮಣ್ಣು ಕೊಚ್ಚಣೆಯನ್ನು ತಡೆಗಟ್ಟಲು ಹಾಗೂ ಮಣ್ಣು ಮತ್ತು ನೀರಿನ ಸಂರಕ್ಷಣೆ, ಹಸಿರು ಹೊದಿಕೆ ಹೆಚ್ಚಳ ಹಾಗೂ ಆಸ್ತಿ ರಹಿತರ ಜೀವನ ಸುಧಾರಣೆ ಮಾಡುವುದು, ಈ ಎಲ್ಲಾ ಕಾರ್ಯಗಳನ್ನು ಒಂದೇ ಸೂರಿನಡಿ ತರುವ ಹಿನ್ನೆಲೆಯಲ್ಲಿ ಕೃಷಿ, ಅರಣ್ಯ, ತೋಟಗಾರಿಕೆ, ಪಶು ಸಂಗೋಪನೆ ಹಾಗೂ ಇತರೆ ಇಲಾಖೆಗಳ ಅಧಿಕಾರಿ/ಸಿಬ್ಬಂದಿಗಳನ್ನು ನಿಯೋಜನೆ ಮೂಲಕ ಪಡೆದು ಅಭಿವೃದ್ಧಿ ಇಲಾಖೆ ಪ್ರಾರಂಭವಾಗಿರುತ್ತದೆ.

ವ್ಯವಹಾರವನ್ನು ವೃದ್ಧಿಸಿ ಒಟ್ಟಾರೆ ಆದಾಯವನ್ನು ಹೆಚ್ಚಿಸುವ ಉದ್ದೇಶ ಹೊಂದಿದೆ.

ರೈತ ಉತ್ಪಾದಕರ ಸಂಸ್ಥೆಗಳ ಸ್ಥಾಪನೆ ಮೂಲಕ ಸಣ್ಣ ಹಾಗೂ ಅತಿಸಣ್ಣ ರೈತರು ತಮ್ಮ ಉತ್ಪನ್ನಗಳನ್ನು ಮಾರುಕಟ್ಟೆ ಮಾಡಲು ಒಬ್ಬಂಟಿಯಾಗಿ ಎದುರಿಸುವ ಹಲವಾರು ಸವಾಲುಗಳನ್ನು ಪರಿಹರಿಸಲು, ಸ್ಥಳೀಯ ರೈತ ಸಮುದಾಯದ ಸಂಧಾನ ಸಾಮರ್ಥ್ಯವನ್ನು ಹಾಗೂ ವ್ಯವಹಾರಿಕ ಪಾಲುದಾರಿಕೆಯನ್ನು ಅಭಿವೃದ್ಧಿಗೊಳಿಸುವ ಮೂಲಕ ರೈತರ ಆರ್ಥಿಕ ಹಾಗೂ ಔದ್ಯಮಿಕ ಸಂಭಾವ್ಯ ಶಕ್ತಿಯನ್ನು ಸಡಿಲಿಸುವಂತೆ ಮಾಡಬಹುದಾಗಿದೆ. ಈ ಸಂಸ್ಥೆಗಳು ಬೇಡಿಕೆಗೆ ಅನುಗುಣವಾಗಿ, ಮೌಲ್ಯ ಸರಪಳಿಯ ಪದ್ಧತಿಯನ್ನು ಅಳವಡಿಸುವ ಮೂಲಕ ಸದಸ್ಯರ ಆರ್ಥಿಕ ಹಾಗೂ ಸಾಮಾಜಿಕ ಲಾಭಗಳನ್ನು ಹೆಚ್ಚಿಸಬಹುದಾಗಿದೆ.

ಜಲಾನಯನ ಅಭಿವೃದ್ಧಿ ಇಲಾಖೆ ವತಿಯಿಂದ ಯೋಜನಾವಾರು ನೊಂದಾಯಿತ ರೈತ ಉತ್ಪಾದಕರ ಸಂಖ್ಯೆಗಳು ಹಾಗೂ ಕಳೆದ 3 ವರ್ಷಗಳಲ್ಲಿ ವೆಚ್ಚ ಭರಿಸಿದ ಅನುದಾನದ ವಿವರಗಳು ಈ ಕೆಳಕಂಡಂತಿರುತ್ತವೆ:

| ಯೋಜನೆ ಹೆಸರು | ನೊಂದಾಯಿತ ರೈತ ಉತ್ಪಾದಕರ ಸಂಖ್ಯೆ | ವೆಚ್ಚದ ವಿವರ (ರೂ. ಲಕ್ಷಗಳಲ್ಲಿ) |
|---|---|---|
| ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ ಹಾಗೂ ರಾಜ್ಯ ಯೋಜನೆ-ರೈತ ಉತ್ಪಾದಕರ ಸಂಸ್ಥೆಗಳಿಗೆ ಬೆಂಬಲ | 130 | 791.58 |
| ಕೇಂದ್ರ ಪುರಸ್ಕೃತ ಯೋಜನೆ-10,000 ರೈತ ಉತ್ಪಾದಕರ ಸಂಸ್ಥೆಗಳ ರಚನೆ ಮತ್ತು ಉತ್ತೇಜನ | 93 | 99.13 |
| ಅಮೃತ ಉತ್ಪಾದಕರ ಸಂಸ್ಥೆಗಳು | 19 | ರೂ.350.00ಲಕ್ಷಗಳ ಅನುದಾನ ಹಂಚಿಕೆಯಾಗಿದ್ದು, ಅನುದಾನ ಬಿಡುಗಡೆಯಾದ ನಂತರ ವೆಚ್ಚ ಭರಿಸಲಾಗುವದು. |

| | | |
|---|---|---|
| ಆ) | ಕಳೆದ 5 ವರ್ಷಗಳಿಂದ ಜಲಾನಯನ ಇಲಾಖೆ ಹಾಗೂ ಇದರ ವ್ಯಾಪ್ತಿಯಲ್ಲಿ ಬರುವ ನಿಗಮ, ಮಂಡಳಿ, ಇತರೆ ಅಂಗ ಸಂಸ್ಥೆಗಳಿಗೆ ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ ಹಾಗೂ ಇತರೆ ಕಡೆಗಳಿಂದ ಎಷ್ಟು ಹಣ ಬಂದಿದೆ; ಖರ್ಚಾಗಿರುವ ಹಣವೆಷ್ಟು; ಉಳಿದಿರುವ ಹಣವೆಷ್ಟು; (ವರ್ಷಾವಾರು ಮಾಹಿತಿ ನೀಡುವುದು) | ಜಲಾನಯನ ಅಭಿವೃದ್ಧಿ ಇಲಾಖೆಯ ವ್ಯಾಪ್ತಿಯಲ್ಲಿ ಯಾವುದೇ ನಿಗಮ, ಮಂಡಳಿ, ಇತರೆ ಅಂಗ ಸಂಸ್ಥೆಗಳು ಇರುವುದಿಲ್ಲ.<br>ಕಳೆದ 5 ವರ್ಷಗಳಿಂದ ಜಲಾನಯನ ಅಭಿವೃದ್ಧಿ ಇಲಾಖೆಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಂದ ವಿವಿಧ ಜಲಾನಯನ ಯೋಜನೆಗಳಡಿ ಬಿಡುಗಡೆಯಾದ, ಖರ್ಚು ಮಾಡಲಾದ ಮತ್ತು ಉಳಿಕೆಯಾದ ಅನುದಾನದ ವರ್ಷವಾರು ವಿವರವನ್ನು **ಅನುಬಂಧ-1**ರಲ್ಲಿ ಒದಗಿಸಿದೆ. |
| ಇ) | ಕಳೆದ 5 ವರ್ಷಗಳಲ್ಲಿ ಜಲಾನಯನ ಇಲಾಖೆ ವ್ಯಾಪ್ತಿಯಲ್ಲಿ ಜಾರಿಯಲ್ಲಿರುವ ಯೋಜನೆಗಳಾವುವು; ಈ ಯೋಜನೆಗಳ ಅಡಿ ಯಾವ ಯಾವ ಸಂಘ ಸಂಸ್ಥೆಗಳನ್ನು ನೋಂದಣಿ ಮಾಡಿಕೊಳ್ಳಲಾಗಿದೆ; ಮತ್ತು ಇವುಗಳ ಮೂಲಕ ಯಾವ ಯಾವ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲಾಗಿದೆ; (ವಿವರವಾದ ಮಾಹಿತಿ ನೀಡುವುದು) | ಕಳೆದ 5 ವರ್ಷಗಳಲ್ಲಿ ಜಲಾನಯನ ಇಲಾಖೆ ವ್ಯಾಪ್ತಿಯಲ್ಲಿ ಜಾರಿಯಲ್ಲಿರುವ ಯೋಜನೆಗಳು:<br>1) ಪ್ರಧಾನಮಂತ್ರಿ ಕೃಷಿ ಸಿಂಚಾಯಿ ಯೋಜನೆ-ಜಲಾನಯನ ಅಭಿವೃದ್ಧಿ & ಇತರೆ ಉಪಚಾರಗಳು<br>2) ಸುಜಲ-ಜಲಾನಯನ ಯೋಜನೆ-III (ಬಾಹ್ಯ ನೆರವು)<br>3) ಸುಜಲ-III ಎಗ್ಸಿಟ್ ಸ್ಟ್ರಾಟಜಿ<br>4) ಜಲಾನಯನ ಅಭಿವೃದ್ಧಿ ಮೂಲಕ ಬರಗಾಲ ತಡೆಯುವಿಕೆ<br>5) ರೈತ ಉತ್ಪಾದಕರ ಸಂಸ್ಥೆಗಳ ಉತ್ತೇಜನ<br>ಜಲಾನಯನ ಅಭಿವೃದ್ಧಿ ಇಲಾಖೆ ಮೂಲಕ 2019-20ನೇ ಸಾಲಿನಿಂದ ರೈತ ಉತ್ಪಾದಕ ಸಂಸ್ಥೆಗಳನ್ನು ನೋಂದಾಯಿಸಲಾಗುತ್ತಿದ್ದು, ಸದರಿ ರೈತ ಉತ್ಪಾದಕರ ಸಂಸ್ಥೆಗಳಿಂದ ಯಾವುದೇ ಕಾಮಗಾರಿಗಳನ್ನು ಅನುಷ್ಠಾನಗೊಳಿಸುತ್ತಿರುವುದಿಲ್ಲ. |
| ಈ) | ರೈತ ಉತ್ಪಾದಕ ಸಂಘ (FPO) ಎಂದರೇನು; ಸದರಿ ಇಲಾಖೆಯಡಿ ಎಷ್ಟು ಉತ್ಪಾದಕ ಸಂಘಗಳನ್ನು ನೋಂದಣಿ ಮಾಡಲಾಗಿದೆ; ಕಳೆದ 3 ವರ್ಷಗಳಲ್ಲಿ ಈ ಸಂಘಗಳಿಗೆ ನೀಡಿರುವ ಅನುದಾನವೆಷ್ಟು; (ವಿವರವಾದ ಮಾಹಿತಿ ನೀಡುವುದು) | ರೈತ ಉತ್ಪಾದಕರ ಸಂಸ್ಥೆಗಳು (FPOs):<br>"ರೈತ ಉತ್ಪಾದಕರ ಸಂಸ್ಥೆ" ಕಂಪನಿ ಕಾಯ್ದೆ 2013 / ಸಹಕಾರ ಸಂಘಗಳ ಕಾಯ್ದೆ ಅಡಿಯಲ್ಲಿ ನೋಂದಣಿಯಾದ ಸಂಸ್ಥೆಯಾಗಿದ್ದು, ಒಂದು ಇಲ್ಲವೇ ಒಂದಕ್ಕಿಂತ ಹೆಚ್ಚು ಉತ್ಪನ್ನಗಳನ್ನು ಉತ್ಪಾದಿಸುವ ಪ್ರಾಥಮಿಕ ಉತ್ಪಾದಕರುಗಳನ್ನು ಹೊಂದಿದ ಸಂಸ್ಥೆಯಾಗಿವೆ. ಸದರಿ ಸಂಸ್ಥೆಯ ಸದಸ್ಯರಿಗೆ ಪರಸ್ಪರ ಸಹಾಯ, ಜ್ಞಾನ ಹಾಗೂ ಅನುಭವ ಹಂಚಿಕೆ ಮಾಡುವುದರ ಜೊತೆಗೆ ಕ್ಷೇತ್ರ ನಿರ್ವಹಣೆಯನ್ನು ಸರಳೀಕರಣಗೊಳಿಸುವ, ಸೂಕ್ತ ತಂತ್ರಜ್ಞಾನವನ್ನು ಬಳಸುವ, ಕೋಯ್ಲೋತ್ತರ ಸಂಗ್ರಹಣೆ ಮತ್ತು ಮೌಲ್ಯವರ್ಧನೆ, ಇಳುವರಿ ಹೆಚ್ಚಿಸುವ ಹಾಗೂ ಉತ್ಪಾದನೆಯನ್ನು ವೃದ್ಧಿಗೊಳಿಸುವ, ಕೊಯ್ಲೋತ್ತರ ನಷ್ಟಗಳನ್ನು ಕಡಿಮೆಗೊಳಿಸುವ, ಮಾರುಕಟ್ಟೆ ಸಂಪರ್ಕಗಳನ್ನು ಸುಧಾರಿಸುವ ಹಾಗೂ ವೃದ್ಧಿಗೊಳಿಸುವ, ಕೃಷಿ ಹಣಕಾಸು ಹಾಗೂ ವಿಮೆಗೆ ಸರಳ ಸಂಪರ್ಕ ಕಲ್ಪಿಸುವ, ಕೃಷಿ |

| | | |
|---|---|---|
| ಉ) | ತುಮಕೂರು ಜಿಲ್ಲಾ ವ್ಯಾಪ್ತಿಯಲ್ಲಿ ಎಷ್ಟು ರೈತ ಉತ್ಪಾದಕ ಸಂಘಗಳಿವೆ; ಅವು ಯಾವುವು; ಯಾವಾಗ ನೋಂದಣಿ ಮಾಡಲಾಗಿದೆ: ನೋಂದಣಿ ಮಾಡಲು ಇರುವ ಮಾನದಂಡಗಳೇನು; ಈಗಾಗಲೇ ಎಷ್ಟು ಅನುದಾನವನ್ನು ಈ ಸಂಘಗಳಿಗೆ ನೀಡಲಾಗಿದೆ? (ತಾಲ್ಲೂಕುವಾರು ವಿವರವಾದ ಮಾಹಿತಿ ನೀಡುವುದು) | ತುಮಕೂರು ಜಿಲ್ಲೆಯಲ್ಲಿ ಜಲಾನಯನ ಅಭಿವೃದ್ಧಿ ಇಲಾಖೆ ವತಿಯಿಂದ ನೊಂದಣಿ ಮಾಡಲಾಗಿರುವ ರೈತ ಉತ್ಪಾದಕರ ಸಂಸ್ಥೆಗಳು ಮತ್ತು ಈ ಸಂಘಗಳಿಗೆ ನೀಡಲಾಗಿರುವ ಅನುದಾನದ ವಿವರ ಹಾಗೂ ನೋಂದಣಿ ಮಾಡಲು ಅನುಸರಿಸುವ ಮಾನದಂಡಗಳ ವಿವರವನ್ನು **ಅನುಬಂಧ-2**ರಲ್ಲಿ ನೀಡಿದೆ. |

ಸಂಖ್ಯೆ: ಕೃಇ/162/ಕೃಕೈಉ/2021

(ಬಿ.ಸಿ.ಪಾಟೀಲ್)
ಕೃಷಿ ಸಚಿವರು

# ಅನುಬಂಧ-1

## ಕಳೆದ ಐದು ವರ್ಷಗಳಲ್ಲಿ ಜಲಾನಯನ ಅಭಿವೃದ್ಧಿ ಇಲಾಖೆಯ ಆಯವ್ಯಯದಲ್ಲಿನ ವಿವಿಧ ಯೋಜನೆಗಳಿಗೆ ಬಿಡುಗಡೆಯಾದ ಅನುದಾನ, ಖರ್ಚಾದ ಅನುದಾನದ ಮತ್ತು ಉಳಿಕೆ ಅನುದಾನದ ವಿವರಗಳು (LCQ 1355)

(ರೂ.ಲಕ್ಷಗಳಲ್ಲಿ)

(ರೂ.ಲಕ್ಷಗಳಲ್ಲಿ)

| ಕ್ರ.ಸಂ | ಯೋಜನೆಯ ಹೆಸರು | 2016-17 | | | | | 2017-18 | | | | |
|---|---|---|---|---|---|---|---|---|---|---|---|
| | | ಪ್ರಸ್ತುತ ವರ್ಷ ಬಿಡುಗಡೆಯಾದ ಅನುದಾನ | | | ಖರ್ಚಾದ ಅನುದಾನ | ಉಳಿಕೆ ಅನುದಾನ | ಪ್ರಸ್ತುತ ವರ್ಷ ಬಿಡುಗಡೆಯಾದ ಅನುದಾನ | | | ಖರ್ಚಾದ ಅನುದಾನ | ಉಳಿಕೆ ಅನುದಾನ |
| | | ಕೇಂದ್ರದ ಪಾಲು | ರಾಜ್ಯದ ಪಾಲು | ಒಟ್ಟು | | | ಕೇಂದ್ರದ ಪಾಲು | ರಾಜ್ಯದ ಪಾಲು | ಒಟ್ಟು | | |
| 1 | ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ-ಜಲಾನಯನ ಅಭಿವೃದ್ಧಿ & ಇತರೆ ಅನುದಾನಗಳು | 23032.20 | 15354.80 | 38387.00 | 26503.89 | 28438.36 | 26068.99 | 17379.32 | 43448.31 | 39662.50 | 31541.49 |
| 2 | ಜಲಾನಯನ ಅಭಿವೃದ್ಧಿ ಮೂಲಕ ಬರಗಾಲ ತಡೆಯುವಿಕೆ ಯೋಜನೆ | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 |
| 3 | ಸುಜಲ ಜಲಾನಯನ ಯೋಜನೆ-III (ಬಾಹ್ಯ ನೆರವು) | 0.00 | 5000.00 | 5000.00 | 4964.00 | 36.00 | 0.00 | 5000.00 | 5000.00 | 4988.14 | 11.86 |
| 4 | ಸುಜಲ-III ಎಗ್ಸಿಟ್ ಸ್ಟ್ರಾಟಜಿ | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 |
| 5 | ರೈತ ಉತ್ಪಾದಕ ಸಂಸ್ಥೆಗಳ ಉತ್ತೇಜನ | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 |

| ಕ್ರ.ಸಂ | ಯೋಜನೆಯ ಹೆಸರು | 2018-19 | | | | | 2019-20 | | | | |
|---|---|---|---|---|---|---|---|---|---|---|---|
| | | ಪ್ರಸ್ತುತ ವರ್ಷ ಬಿಡುಗಡೆಯಾದ ಅನುದಾನ | | | ಖರ್ಚಾದ ಅನುದಾನ | ಉಳಿಕೆ ಅನುದಾನ | ಪ್ರಸ್ತುತ ವರ್ಷ ಬಿಡುಗಡೆಯಾದ ಅನುದಾನ | | | ಖರ್ಚಾದ ಅನುದಾನ | ಉಳಿಕೆ ಅನುದಾನ |
| | | ಕೇಂದ್ರದ ಪಾಲು | ರಾಜ್ಯದ ಪಾಲು | ಒಟ್ಟು | | | ಕೇಂದ್ರದ ಪಾಲು | ರಾಜ್ಯದ ಪಾಲು | ಒಟ್ಟು | | |
| 1 | ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ-ಜಲಾನಯನ ಅಭಿವೃದ್ಧಿ & ಇತರೆ ಅನುದಾನಗಳು | 15992.57 | 10661.71 | 26654.28 | 47423.78 | 11795.00 | 9960.00 | 6640.00 | 16600.00 | 25606.32 | 2605.80 |
| 2 | ಜಲಾನಯನ ಅಭಿವೃದ್ಧಿ ಮೂಲಕ ಬರಗಾಲ ತಡೆಯುವಿಕೆ ಯೋಜನೆ | 0.00 | 0.00 | 0.00 | 0.00 | 0.00 | 0.00 | 2500.00 | 2500.00 | 2368.79 | 131.21 |
| 3 | ಸುಜಲ ಜಲಾನಯನ ಯೋಜನೆ-III (ಬಾಹ್ಯ ನೆರವು) | 0.00 | 10000.00 | 10000.00 | 9984.73 | 15.27 | 0.00 | 3925.78 | 3925.78 | 3907.85 | 17.93 |
| 4 | ಸುಜಲ-III ಎಗ್ಸಿಟ್ ಸ್ಟ್ರಾಟಜಿ | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 |
| 5 | ರೈತ ಉತ್ಪಾದಕ ಸಂಸ್ಥೆಗಳ ಉತ್ತೇಜನ | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 |

| ಕ್ರ.ಸಂ | ಯೋಜನೆಯ ಹೆಸರು | 2020-21 | | | | |
|---|---|---|---|---|---|---|
| | | ಪ್ರಸ್ತುತ ವರ್ಷ ಬಿಡುಗಡೆಯಾದ ಅನುದಾನ | | | ಖರ್ಚಾದ ಅನುದಾನ | ಉಳಿಕೆ ಅನುದಾನ |
| | | ಕೇಂದ್ರದ ಪಾಲು | ರಾಜ್ಯದ ಪಾಲು | ಒಟ್ಟು | | |
| 1 | ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ-ಜಲಾನಯನ ಅಭಿವೃದ್ಧಿ & ಇತರೆ ಅನುದಾನಗಳು | 7122.05 | 4748.03 | 11870.08 | 14377.54 | 1609.87 |
| 2 | ಜಲಾನಯನ ಅಭಿವೃದ್ಧಿ ಮೂಲಕ ಬರಗಾಲ ತಡೆಯುವಿಕೆ ಯೋಜನೆ | 0.00 | 2500.00 | 2500.00 | 2472.89 | 27.11 |
| 3 | ಸುಜಲ ಜಲಾನಯನ ಯೋಜನೆ-III (ಬಾಹ್ಯ ನೆರವು) | 0.00 | 0.00 | 0.00 | 0.00 | 0.00 |
| 4 | ಸುಜಲ-III ಎಗ್ಸಿಟ್ ಸ್ಟ್ರಾಟಜಿ | 0.00 | 806.00 | 806.00 | 793.52 | 12.48 |
| 5 | ರೈತ ಉತ್ಪಾದಕ ಸಂಸ್ಥೆಗಳ ಉತ್ತೇಜನ | 0.00 | 50.00 | 50.00 | 49.25 | 0.75 |

# ಅನುಬಂಧ-2

## LCQ-1355

ತುಮಕೂರು ಜಿಲ್ಲೆಯಲ್ಲಿ ಜಲಾನಯನ ಅಭಿವೃದ್ಧಿ ಇಲಾಖೆ ವತಿಯಿಂದ ನೊಂದಣಿ ಮಾಡಲಾಗಿರುವ ರೈತ ಉತ್ಪಾದಕರ ಸಂಸ್ಥೆಗಳು ಮತ್ತು ಈ ಸಂಘಗಳಿಗೆ ನೀಡಲಾಗಿರುವ ಅನುದಾನದ ವಿವರ ಹಾಗೂ ನೋಂದಣಿ ಮಾಡಲು ಅನುಸರಿಸುವ ಮಾನದಂಡಗಳ ವಿವರ

| ಕ್ರ. ಸಂ. | ತಾಲ್ಲೂಕು | ರೈತ ಉತ್ಪಾದಕ ಸಂಸ್ಥೆ ಹೆಸರು/ ವಿಳಾಸ | ನೋಂದಣಿ ಮಾಡಲಾದ ದಿನಾಂಕ | ನೀಡಲಾದ ಅನುದಾನ (ರೂ. ಲಕ್ಷಗಳಲ್ಲಿ) | ನೋಂದಣಿ ಮಾಡಲು ಇರುವ ಮಾನದಂಡಗಳು |
|---|---|---|---|---|---|
| 1 | ತುರುವೇಕೆರೆ | ಹಳ್ಳಿಕಾರ್ ತತ್ವ ರೈತ ಉತ್ಪಾದಕ ಸಂಸ್ಥೆ . ಪುಟ್ಟರಂಗೇಗೌಡ ಕಾಂಪ್ಲೆಕ್ಸ್, ಇಂದಿರಾ ನಗರ, ಬ್ಯಾಂಕ್ ಆಫ್ ಬರೋಡ ಹತ್ತಿರ, ತುರುವೇಕೆರೆ-572227 | 18-08-2020 | 10.458 | • ರೈತ ಉತ್ಪಾದಕರ ಸಂಸ್ಥೆಗಳು ಒಂದು ಇಲ್ಲದೇ ಒಂದಕ್ಕಿಂತ ಹೆಚ್ಚು ಉತ್ಪನ್ನಗಳನ್ನು ಉತ್ಪಾದಿಸುವ ಪ್ರಾಥಮಿಕ ಉತ್ಪಾದಕರನ್ನು ಹೊಂದಿರಬೇಕು.<br>• ರೈತ ಉತ್ಪಾದಕರ ಸಂಸ್ಥೆಗಳು 200-500 ರೈತ ಸದಸ್ಯರನ್ನು ನೋಂದಣಿ ಸಮಯದಲ್ಲಿ ಹೊಂದಿದ್ದು ತದನಂತರ ಸದಸ್ಯತ್ವವನ್ನು 1000 ರೈತ ಸದಸ್ಯರಿಗೆ ಹೆಚ್ಚಿಸುವ ಸಾಮರ್ಥ್ಯ ಹೊಂದಿರಬೇಕು. ಆದಾಗ್ಯೂ ಬುಡಕಟ್ಟು, ಮಲೆನಾಡು, ಕರಾವಳಿ ಪ್ರದೇಶಗಳಲ್ಲಿ ಮತ್ತು ಇತರ ಸ್ಥಳೀಯ ನಿರ್ಧಿಷ್ಟವಾದ ಪ್ರದೇಶಗಳಲ್ಲಿ ರೈತ ಉತ್ಪಾದಕರ ಸಂಸ್ಥೆಗಳು ಕಡಿಮೆ ಸದಸ್ಯರುಗಳನ್ನು ಹೊಂದಬಹುದಾಗಿದೆ.<br>• ರೈತ ಉತ್ಪಾದಕರ ಸಂಸ್ಥೆಗಳ ರಚನೆಯು ಮೂಲವಾಗಿ ಗುಚ್ಛ ಗ್ರಾಮಗಳ (Cluster) ಆಧಾರದ ಮೇಲಿರಬೇಕು, ಹಾಗೂ ಮಾರುಕಟ್ಟೆ ಸಮಸ್ಯೆ ಎದುರಿಸುತ್ತಿರುವ ಕೆಲವೇ ಪ್ರಮುಖ ಬೆಳೆಗಳ ಮೇಲೆ ಕೇಂದ್ರೀಕೃತವಾಗಿರಬೇಕು.<br>• ರೈತ ಉತ್ಪಾದಕರ ಸಂಸ್ಥೆ ಒಂದು ವ್ಯವಹಾರಿಕ ಸಂಸ್ಥೆಯಾಗಿದ್ದು, ಸೂಕ್ತ ಬೆಳೆ ಅಥವಾ ಬೆಳೆಗಳನ್ನು ಉತ್ಪಾದಿಸುವ ರೈತ ಸದಸ್ಯರಿಂದ ಪಾಲುದಾರಿಕೆ ಬಂಡವಾಳ (ಷೇರು ಮೊತ್ತ) ವನ್ನು ಪಡೆದು, ತನ್ನದೇ ಆದ ವಿಸ್ತೃತ ವ್ಯವಹಾರ ಯೋಜನೆಯನ್ನು ರೂಪಿಸಬೇಕಾಗಿರುತ್ತದೆ<br>• ರೈತ ಉತ್ಪಾದಕರ ಸಂಸ್ಥೆಯನ್ನು ಉತ್ಪಾದಕರ ಕಂಪನಿಯಾಗಿ, ಕಂಪನಿ ಕಾಯ್ದೆ 2013/ಕೋ-ಆಪರೇಟಿವ್ ಸೊಸೈಟಿ ಕಾಯ್ದೆ ಅಡಿಯಲ್ಲಿ ನೋಂದಾಯಿಸಬೇಕಾಗುತ್ತದೆ. |
| 2 | ತುರುವೇಕೆರೆ | ಸ್ವರ್ಣ ಭೂಮಿ ರೈತ ಉತ್ಪಾದಕ ಸಂಸ್ಥೆ, ದಬ್ಬೇಘಟ್ಟ, ತುರುವೇಕೆರೆ -572227 | 23-09-2020 | 8.343 | |
| 3 | ತುರುವೇಕೆರೆ | ಸುಧನ್ವ ರೈತ ಉತ್ಪಾದಕ ಸಂಸ್ಥೆ, ಸಂಪಿಗೆ, ದಂಡಿನಶಿವರ(ಹೋ),ತುರುವೇಕೆರೆ -572227 | 05-02-2021 | 7.069 | |
| 4 | ತುರುವೇಕೆರೆ | ಕೃಷಿಕರ ರೈತ ಉತ್ಪಾದಕ ಸಂಸ್ಥೆ, ಮಾಯಸಂದ್ರ, ತುರುವೇಕೆರೆ -572227 | 01-02-2021 | 7.118 | |
| 5 | ತಿಪಟೂರು | ಜೀವ ಜಲ ರೈತ ಉತ್ಪಾದಕರ ಸಂಸ್ಥೆ, ನೊಣವಿನಕೆರೆ, ತಿಪಟೂರು ತಾಲ್ಲೂಕು | 02-05-2020 | 9.301 | |
| 6 | ತುಮಕೂರು | ಬೆಳ್ಳಾವಿ ರೈತ ಉತ್ಪಾದಕ ಸಂಸ್ಥೆ, ಚಿಕ್ಕಬೆಳ್ಳಾವಿ, ತುಮಕೂರು (ತಾ)-572107 | 09-12-2021 | 0 | |
| 7 | ಕುಣಿಗಲ್ | ಹಿಮದುರ್ಗ ರೈತ ಉತ್ಪಾದಕರ ಸಂಸ್ಥೆ, ಹುತ್ರಿದುರ್ಗ, ಕುಣಿಗಲ್ (ತಾ)-572126 | 26-10-2021 | 0 | |
| 8 | ಪಾವಗಡ | ಉಳುಮೆ ರೈತ ಉತ್ಪಾದಕರ ಸಂಸ್ಥೆ, ಬಿ. ಹೊಸಳ್ಳಿ, ಪಾವಗಡ (ತಾ)-572141 | 07-12-2021 | 0 | |
| 9 | ಚಿಕ್ಕನಾಯಕನಹಳ್ಳಿ | ಹಂದನಕೆರೆ ರೈತ ಉತ್ಪಾದಕರ ಸಂಸ್ಥೆ, ಹಂದನಕೆರೆ | 14-12-2021 | 0 | |
| 10 | ಶಿರಾ | ಒಕ್ಕಲು ರೈತ ಉತ್ಪಾದಕರ ಸಂಸ್ಥೆ., ಜ್ಯೋತಿ ನಗರ, ಶಿರಾ-572137 | 01-12-2021 | 0 | |
| 11 | ಮಧುಗಿರಿ | ಜಯಮಂಗಲಿ ರೈತ ಉತ್ಪಾದಕರ ಸಂಸ್ಥೆ, ಹೊಸಹಳ್ಳಿ, ಮಧುಗಿರಿ (ತಾ)-572175 | 30-11-2021 | 0 | |
| 12 | ಚಿಕ್ಕನಾಯಕನಹಳ್ಳಿ | ತುಮಕೂರು ಬಂಜಾರ ರೈತ ಉತ್ಪಾದಕರ ಸಂಸ್ಥೆ, ಮುದ್ದೇನಹಳ್ಳಿ, ಚಿಕ್ಕನಾಯಕನಹಳ್ಳಿ (ತಾ)-572 228 | 19-02-2021 | 0 | |